

# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 09-03-2021 ಪ್ರಶ್ನೆ ಸಂಖ್ಯೆ : 714(820)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಹೆಚ್. ಎಂ. ರಮೇಶ ಗೌಡ(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 09-03-2021

ಉತ್ತರಿಸುವ ಸಚಿವರು: ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು

ವಿಷಯ : ರಾಜ್ಯದಲ್ಲಿನ ಅಕ್ರಮ ಕಲ್ಲು ಗಣಿಗಾರಿಕೆ ಕುರಿತು

(ಅ) ರಾಜ್ಯದಲ್ಲಿ ಖನಿಜ ಪರವಾನಗಿ ಇಲ್ಲದೆ ನಡೆಸುತ್ತಿರುವ ಅಕ್ರಮ ಕಲ್ಲು ಗಣಿಗಾರಿಕೆ ನಿಯಂತ್ರಣಕ್ಕೆ ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ; (ವಿವರ ನೀಡುವುದು)

(ಆ) 2020-21ನೇ ಸಾಲಿನಲ್ಲಿ ಅಕ್ರಮ ಕಲ್ಲು ಗಣಿಗಾರಿಕೆ ನಿಯಂತ್ರಣಕ್ಕೆ ಡ್ರೋನ್ ಸಮೀಕ್ಷೆ ಕೈಗೊಳ್ಳಲು ಮಂಜೂರಾದ ಅನುದಾನವೆಷ್ಟು; ಈ ಸಮೀಕ್ಷೆಯನ್ನು ಯಾವ ಯಾವ ಜಿಲ್ಲೆಗಳಲ್ಲಿ ನಡೆಸಲಾಗಿದೆ; ಈ ಸಮೀಕ್ಷೆಯಿಂದ ಎಷ್ಟು ಅಕ್ರಮ ಕಲ್ಲು ಗಣಿಗಾರಿಕೆಗಳನ್ನು ಗುರುತಿಸಲಾಗಿದೆ; (ಜಿಲ್ಲಾವಾರು ವಿವರವನ್ನು ನೀಡುವುದು)

(ಇ) ಗಣಿಗಾರಿಕೆಯಿಂದ ತೊಂದರೆಗೊಳಗಾದ ಪ್ರದೇಶಗಳ ಅಭಿವೃದ್ಧಿ ಮತ್ತು ಜನರ ಜೀವನಮಟ್ಟ ಸುಧಾರಣೆಗೆ ಗುತ್ತಿಗೆದಾರರಿಂದ ಜಿಲ್ಲಾ ನಿಧಿಗೆ ರಾಜಧನ ಸಂಗ್ರಹ ಮಾಡಲಾಗುತ್ತಿದೆಯೇ; ಮಾಡುತ್ತಿದ್ದಲ್ಲಿ, ಕಳೆದ 3 ವರ್ಷಗಳಲ್ಲಿ ಸಂಗ್ರಹವಾದ ಮತ್ತು ಬಳಕೆ ಮಾಡಿರುವ ವಂತಿಗೆ ಎಷ್ಟು? (ಜಿಲ್ಲಾವಾರು ವಿವರವನ್ನು ನೀಡುವುದು)